CPMG / KA / BG-GPO/13/2003-2005



# ಕರ್ನಾಟಕ ರಾಜ್ಯ ಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮೇ ೧೨, ೨೦೦೫ (ವೈಶಾಖ ೨೨, ಶಕ ವರ್ಷ ೧೯೨೭) | ಸಂಚಿಕೆ ೧೯ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಎಸ್‌ಆರ್-63:2005, ದಿನಾಂಕ: 13ನೇ ಏಪ್ರಿಲ್ 2005**

**ಅರ್ಜಿದಾರರು**

1. ಸಂಜೀವಪ್ಪ ತಂದೆ ಯಮನಪ್ಪ ತಳವಾರ ಉರ್ಫ್ ಅಂಬಿಗರ್
2. ನೀಲಮ್ಮ ಗಂಡ ಸಂಜೀವಪ್ಪ ತಳವಾರ ಉರ್ಫ್ ಅಂಬಿಗರ್, ವಾಸ-ಹಿಟ್ನಳ್ಳಿ, ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು**

1. ಓಂಕಾರ ತಂದೆ ತುಳಸಿರಾಮ ಪವಾರ ವಾಸ-ಎಂ.ಬಿ. ನಗರ್, ವಿ. ಪೊಲೀಸ್ ಸ್ಟೇಷನ್ ವರ್ಶಾನಿಲಯ, ಗುಲ್ಬರ್ಗಾ.
2. ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪೂರ.

**ಪ್ರಕಟಣೆ**

ಶ್ರೀ:ಶ್ರೀಮತಿ ಸಂಜೀವಪ್ಪ ತಂದೆ ಯಮನಪ್ಪ ತಳವಾರ ಉರ್ಫ ಅಂಬಿಗರ್ (2) ನೀಲಮ್ಮ ಗಂಡ ಸಂಜೀವಪ್ಪ ತಳವಾರ ಉರ್ಫ ಅಂಬಿಗರ್ ಇವರುಗಳಾದ ತಾವು ಮೃತ ಮುತ್ತಣ್ಣ ಉರ್ಫ ಯಮನಪ್ಪ ಇವರ - ಮತ್ತು - ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮುತ್ತಣ್ಣ ಉರ್ಫ ಯಮನಪ್ಪ ಇವರು ಒಂದನೇ ಪ್ರತಿವಾದಿಗಳಾದ ಓಂಕಾರ ತಂದೆ ತುಳಸಿರಾಮ ಪವಾರ ಇವರ ಟ್ರಕ್ ಸಂಖ್ಯೆ: ಕೆಎ-25,ಎ-6245 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರ**

ಪಿ.ಆರ್. 648 ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2, ಬಿಜಾಪುರ ಜಿಲ್ಲೆ ಬಿಜಾಪುರ.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ,**

**ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ಇವರ ಕಾರ್ಯಾಲಯ**

**ವಿಷಯ:** ಸಮಾಪನೆಯಲ್ಲಿರುವ ಸಹಕಾರ ಸಂಘಗಳ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ದಿನಾಂಕ:ಸನಿಬೆಂ-44:ಸಮಾಪನೆ: 10:2004-05 ದಿ:31.3.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರು ಉಲ್ಲೇಖ (1)ರ ಪತ್ರದಲ್ಲಿ ಅನುಬಂಧ-1ರಲ್ಲಿ ತಿಳಿಸಿದ ಸಮಾಪನೆಗೊಂಡ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಸಂಘಗಳಲ್ಲಿ ಆಸ್ತಿ-ಜವಾಬ್ದಾರಿ ವಿಲೇವಾರಿಗೆ ಯಾವುದೇ ದಾರಿ ಇರುವುದಿಲ್ಲವೆಂದು ಸಹ ತಿಳಿಸುತ್ತಾ, ಈ ಸಂಘಗಳನ್ನು ಸಮಾಪನೆಯಲ್ಲಿ ಮುಂದುವರೆಸುವುದರಿಂದ ಯಾರಿಗೂ ಪ್ರಯೋಜನ ಇಲ್ಲವೆಂದು ತಿಳಿಸಿ, ಈ ಸಹಕಾರ ಸಂಘಗಳ ನೋಂದಣಿ ರದ್ದತಿಗೆ ಶಿಫಾರಸ್ಸು ಮಾಡಿರುತ್ತಾರೆ.

ಈ ಸಮಾಪನೆಗೊಂಡ ಸಹಕಾರ ಸಂಘಗಳ ಸಮಾಪನಾಧಿಕಾರಿಗಳು ಈ ಸಂಘಗಳ ಪ್ರಭಾರವನ್ನು ವಹಿಸಿಕೊಳ್ಳಲು ಎಷ್ಟೇ ಪ್ರಯತ್ನ ಪಟ್ಟರೂ ಈ ಸಂಘಗಳ ಅಸ್ಥಿತ್ವವು ನೋಂದಾಯಿತ ವಿಳಾಸಗಳಲ್ಲಾಗಲೀ ಇಲ್ಲದಿರುವುದನ್ನು ಮನಗಂಡು ಈ ಸಂಘಗಳ ಪ್ರಭಾರವನ್ನು ಸ್ವಯಂ ಆಗಿ ವಹಿಸಿಕೊಂಡಿರುತ್ತಾರೆ.

ಈ ಸಂಘಗಳ ಅಸ್ಥಿತ್ವವು ದೊರೆಯದೆ ಇದ್ದ ಕಾರಣ ಈ ಸಂಘಗಳ ನೋಂದಣಿ ರದ್ದುಪಡಿಸುವ ಪೂರ್ವದಲ್ಲಿ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರು "ಸಂಜೆವಾಣಿ" ಕನ್ನಡ ದಿನಪತ್ರಿಕೆ ದಿನಾಂಕ:2.3.2005 ರಂದು ತಮ್ಮ ಪ್ರಕಟಣೆ ಸಂಖ್ಯೆ:ಜೆಆರ್‌ಬಿ/ ಎಲ್‌ಕ್ಯೂಡಿ/06/ಎಲ್‌ಎಂಸಿ/2004-05 ದಿನಾಂಕ:22.12.2004ನ್ನು ಪ್ರಕಟಿಸಿ ಈ ಸಂಘಗಳ ಆಡಳಿತ ಮಂಡಳಿ ಸದಸ್ಯರಾಗಲೀ ಅಥವಾ ಸಾರ್ವಜನಿಕರಾಗಲೀ, ಹಣಕಾಸು ಸಂಸ್ಥೆಗಳಾಗಲೀ ಈ ಸಂಘಗಳ ನೋಂದಣಿ ರದ್ದುಪಡಿಸಲು ಆಕ್ಷೇಪಣೆಗಳಿದ್ದಲ್ಲಿ ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗಾಗಿ ಇಲಾಖೆಗೆ ಲಿಖಿತವಾಗಿ ಸಮರ್ಥಿಸುವ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ನಿಗದಿಪಡಿಸುವ ಅವಧಿಯಲ್ಲಿ ಈ ಅನುಬಂಧದಲ್ಲಿರುವ ಸಂಘಗಳ ಬಗ್ಗೆ ಯಾರೂ ಸಹ ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ.

ಮೇಲೆ ವಿವರಿಸಿದ ಅಂಶದ ಹಿನ್ನೆಲೆಯಲ್ಲಿ ಅನುಬಂಧದಲ್ಲಿ ನಮೂದಿಸಿರುವ ಸಹಕಾರ ಸಂಘಗಳು ಹಲವಾರು ವರ್ಷಗಳಿಂದ ನಿಷ್ಕ್ರಿಯಗೊಂಡಿದ್ದು, ಸದರಿ ಸಂಘಗಳ ಅಸ್ಥಿತ್ವ ಎಲ್ಲಿದೆ ಎಂಬ ಬಗ್ಗೆ ಮತ್ತು ಇದರ ಲೆಕ್ಕಪತ್ರಗಳು ಯಾರ ಬಳಿ ಇವೆ ಎಂಬ ಬಗ್ಗೆ ಯಾವುದೇ ರೀತಿಯ ಮಾಹಿತಿ ಇಲ್ಲದಿರುವುದರಿಂದ ಈ ಸಂಘಗಳ ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯಿದೆ 1959ರ ಕಲಂ 73 ಮತ್ತು 74 ಹಾಗೂ ಸಹಕಾರ ಸಂಘಗಳ ನಿಯಮಾವಳಿಗಳ ನಿಯಮ 24 ಮತ್ತು 33ಗಳಲ್ಲಿ ವಿಧಿಸಿರುವಂತೆ ಸಮಾಪನಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಸಾಧ್ಯತೆ ಇಲ್ಲದಿರುವುದನ್ನು ಮನಗಾಣಲಾಗಿದೆ. ಈ ಸಂಘಗಳನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ರೀತಿಯ ಉಪಯೋಗ ಇಲ್ಲದಿರುವುದನ್ನು ಗಮನಿಸಲಾಗಿದೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರು ಅನುಬಂಧದಲ್ಲಿ ನಮೂದಿಸಿರುವ ಸಹಕಾರ ಸಂಘಗಳ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುವುದರಿಂದ ಹಾಗೂ ತತ್ಸಂಬಂಧವಾದ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರನ್ವಯ ಸದರಿ ಸಂಘಗಳ ನೋಂದಣಿಯನ್ನು ರದ್ದುಪಡಿಸಬಹುದೆಂದು ಅಭಿಪ್ರಾಯಕ್ಕೆ ಬಂದು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ:ಡಿಆರ್‌ಬಿ-1:ನೋಂ.ರದ್ದತಿ:33:2004-05, ದಿನಾಂಕ: 31ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಅನುಬಂಧದಲ್ಲಿ ತಿಳಿಸಿದ 07 ಸಹಕಾರ ಸಂಘಗಳ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿದ್ದೇನೆ. ಈ ದಿನದಿಂದ ಈ ಸಂಘಗಳು ಕಾರ್ಪೋರೇಟ್ ಬಾಡಿಯಾಗಿರುವ ಅಸ್ಥಿತ್ವವನ್ನು ಕಳೆದುಕೊಂಡಿವೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಸಹಿ ಮತ್ತು ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:31.3.2005ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಅನುಬಂಧ**

**ಈ ಕಛೇರಿಯ ಆದೇಶ ಸಂಖ್ಯೆ:ಡಿಆರ್‌ಬಿ-1/ನೋಂದಣಿ ರದ್ದತಿ/ /2004-05 ದಿನಾಂಕ: 31ನೇ ಮಾರ್ಚ್ 2005**

| ಕ್ರ. ಸಂ. | ಸಂಘದ ಹೆಸರು | ನೋಂದಣಿ ಸಂಖ್ಯೆ |
|---|---|---|
| 1. | ಚಿಕ್ಕನಹಳ್ಳಿ ಸಿಲ್ಕ್ ರೀಲರ್ಸ್ ಸಹಕಾರ ಸಂಘ ನಿ., | ಲಭ್ಯವಿಲ್ಲ |
| 2. | ಬೆಂಗಳೂರು ಜಿಲ್ಲಾ ಕೈಗಾರಿಕಾ ಸಹಕಾರ ಸಂಘ ನಿ., | ಲಭ್ಯವಿಲ್ಲ |
| 3. | ಮಲ್ಟಿಪರ್ಪ್‌ಸ್ ಇಂಡಸ್ಟ್ರಿಯಲ್ ಸಹಕಾರ ಸಂಘ ನಿ., | ಲಭ್ಯವಿಲ್ಲ |
| 4. | ಪೌಲ್ಟ್ರಿ ಇಂಡಸ್ಟ್ರಿಯಲ್ ಸಹಕಾರ ಸಂಘ ನಿ., | ಲಭ್ಯವಿಲ್ಲ |
| 5. | ದಲಿತ ವಿವಿಧ ಗ್ರಾಮೋದ್ಯೋಗ ಕೈಗಾರಿಕಾ ಸಹಕಾರ ಸಂಘ ನಿ., | ಲಭ್ಯವಿಲ್ಲ |
| 6. | ರಾಜಾಜಿನಗರ ಇಂಡಸ್ಟ್ರಿಯಲ್ ಎಸ್ಟೇಟ್ ಎಂಪ್ಲಾಯೀಸ್ ಸಹಕಾರ ಸಂಘ ನಿ., | ನಂ.192/ಎಆರ್‌ಬಿ/65 ದಿನಾಂಕ:10.12.1965 |
| 7. | ಬೆಂಗಳೂರು ಸಿಟಿ ಫ್ಯೂಯಲ್ ಡೀಲರ್ಸ್ ಸಹಕಾರ ಸಂಘ ನಿ., | ಲಭ್ಯವಿಲ್ಲ |

ಪಿ.ಆರ್. 649 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ,**

**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು - 560 027**

**ಹಿಂದಿನ ವ್ಯಾಜ್ಯ ಸಂಖ್ಯೆ: 4250 / 2004-05**

**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯು.ಬಿ.ಎಫ್/ 1406 / 2004-05**

**ಅರ್ಜಿದಾರರು**

1) ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ.,
ನಂ.11, ಬುಲ್ ಟೆಂಪಲ್ ರಸ್ತೆ, ಬಸವನಗುಡಿ, ಬೆಂಗಳೂರು-04.

**ಎದುರು ಅರ್ಜಿದಾರರು**

1) ಶ್ರೀಮತಿ ಸುಧಾ,
ತಂದೆ ವಾಸುದೇವ ಪಿಂಚಕನ್
ಮನೆ:44, ವೈಕುಂಠ ಲೇಔಟ್, ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ - 30

2) ಶ್ರೀ ವಾಸುದೇವ ಚಂಡುರಾಯ ಪಿಂಚಕನ್
ಮನೆ:44, ಸಿಲ್ವರ್ ಟೌನ್, ಗೋಕುಲ ರಸ್ತೆ, ಹುಬ್ಬಳ್ಳಿ-30.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ತೀರ್ಪಿಗೆ ಪೂರ್ವ ಜಪ್ತಿ ಆದೇಶದ ಸ್ಥಿರೀಕರಣ**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಕಾಸ್ ಟೈಟಲ್‌ನಲ್ಲಿ ನಮೂದಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.1,26,057.00 ಗಳನ್ನು ದಿನಾಂಕ:1.7.2004 ರಿಂದ ಶೇ.18 ರಂತೆ ಬಡ್ಡಿಯೊಂದಿಗೆ ವಸೂಲಾತಿಗೆ ಆದೇಶ ನೀಡಲು ಕೋರಿರುತ್ತಾರೆ. ಸದರಿ ದಾವಾ ಅರ್ಜಿಯೊಂದಿಗೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಅರ್ಜಿ ಸಲ್ಲಿಸಿ 1ನೇ ಪ್ರತಿವಾದಿಯವರ ತಂದೆಯಾದ 2ನೇ ಪ್ರತಿವಾದಿ ಶ್ರೀ ವಾಸುದೇವ ಚಂಡುರಾಯ ಪಿಂಚಕನ್ ಇವರ ಹೆಸರಿನಲ್ಲಿರುವ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯಲ್ಲಿ 1/3 ಭಾಗ ಹಿಸ್ಸೆಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಕೋರಿದ್ದು, ಈ ಕೋರಿಕೆಯನ್ನು ಅಂಗೀಕರಿಸಿ ದಿನಾಂಕ 6.12.2004ರ ಆದೇಶದ ಮೂಲಕ ಷೆಡ್ಯೂಲ್ ಆಸ್ತಿಯ 1/3 ಭಾಗ ಹಿಸ್ಸೆಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿಗೆ ಆದೇಶ ನೀಡಲಾಗಿತ್ತು.

2. 1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,30,000.00 ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005ರ ಒಳಗಾಗಿ ಅಧಿಕೃತ ಚಲನ್/ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸಲು ಪ್ರತಿವಾದಿಯವರಿಗೆ ನಿರ್ದೇಶಿಸಲಾಗಿತ್ತು. ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಸೂಚಿಸಲಾಗಿತ್ತು.

3. ದಿನಾಂಕ: 2.4.2005 ರಂದು ವ್ಯಾಜ್ಯವನ್ನು ವಿಚಾರಣೆಗೆ ತೆಗೆದುಕೊಳ್ಳಲಾಯಿತು. ವಾದಿಯವರು ಹಾಜರಿದ್ದು ಪ್ರತಿವಾದಿಗಳು ಗೈರು ಹಾಜರಾಗಿರುತ್ತಾರೆ. ಪ್ರತಿವಾದಿಗಳು ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ವೀಕರಿಸಿದ್ದು, ಸದರಿ ಆದೇಶದಲ್ಲಿ ಸೂಚಿಸಿರುವಂತೆ ಪ್ರತಿವಾದಿಯವರು ರೂ.1,30,000.00 ಮೊತ್ತವನ್ನು ವಾದಿ ಬ್ಯಾಂಕಿನ ಅಮಾನತ್ ಖಾತೆಯಲ್ಲಿ ಜಮಾ ಮಾಡಿರುವುದಿಲ್ಲವೆಂದು ವಾದಿಯವರು ವಿಚಾರಣೆಯಲ್ಲಿ ತಿಳಿಸುತ್ತಾ ಸದರಿ ಆದೇಶವನ್ನು ಸ್ಥಿರೀಕರಿಸಲು ಕೋರಿರುತ್ತಾರೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:191:ಸಿಎಲ್‌ಎಂ:2004 (ಭಾಗ-1) ದಿನಾಂಕ:2-2-2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಆರ್.ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ಥಿಗಳ ತೀರ್ಪಿಗೆ ಪೂರ್ವ ಜಪ್ತಿಯ ದಿನಾಂಕ 6.12.2004ರ ಆದೇಶವನ್ನು ಸ್ಥಿರೀಕರಿಸಿರುತ್ತೇನೆ.

**ಷೆಡ್ಯೂಲ್ ಆಸ್ತಿಯ ವಿವರ**

ಶ್ರೀ ವಾಸುದೇವ ಚಂಡೂರಾಯ ಪಿಂಚಕನ ಇವರ ಹೆಸರಿನಲ್ಲಿ ಇರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮದಲ್ಲಿ ಸರ್ವೆ ನಂ.43/2 ಇವುಗಳಲ್ಲಿ 1ನೇ ಪ್ರತಿವಾದಿಯಾದ ಶ್ರೀಮತಿ ಸುಧಾ ವಾಸುದೇವ ಪಿಂಚಕನ ಇವರ 1/3 ಭಾಗ ಹಿಸ್ಸೆ.

ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮ ಸರ್ವೆ ನಂ.43/2 ಇದರ ವಿಸ್ತೀರ್ಣ 11 ಎಕರೆ 14 ಗುಂಟೆ ಇದರ ಚಕ್ಕುಬಂದಿ

(ಅವಿಭಾಜಿತ ಪಾಲು)

ಪೂರ್ವಕ್ಕೆ : 53ನೇ ಸರ್ವೆ ನಂಬರ್ ಜಮೀನು
ಪಶ್ಚಿಮಕ್ಕೆ : 42ನೇ ಸರ್ವೆ ನಂಬರ್ ಜಮೀನು
ಉತ್ತರಕ್ಕೆ : 44 ಮತ್ತು 45ನೇ ಸರ್ವೆ ನಂಬರ್ ಜಮೀನು
ದಕ್ಷಿಣಕ್ಕೆ : 40ನೇ ಸರ್ವೆ ನಂಬರ್ ಜಮೀನು

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 2.4.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441)

ಪಿ.ಆರ್. 650 ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ,**

**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು - 560 027**

**ಹಿಂದಿನ ವ್ಯಾಜ್ಯ ಸಂಖ್ಯೆ: 4249 / 2003-04**

**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯು.ಬಿ.ಎಫ್-ವ/ 1407 / 2004-05**

| ಅರ್ಜಿದಾರರು | ಎದುರು ಅರ್ಜಿದಾರರು |
|---|---|
| 1) ಕಾರ್ಯದರ್ಶಿ,<br>ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ.,<br>ನಂ.11, ಬುಲ್ ಟೆಂಪಲ್ ರಸ್ತೆ, ಬಸವನಗುಡಿ, ಬೆಂಗಳೂರು-04. | 1) ಶ್ರೀ ಸುಭಾಸ ಚಂಡೂರಾಯ ಶೇಠ,<br>ಕೇರಾಫ್ ವಿ.ಸಿ. ಪಿಂಚಕನ್, ನಂ.44, ವೈಕುಂಠ ಲೇಔಟ್,<br>ಸಿಲ್ವರ್ ಟೌನ್, ಗೋಕುಲ ರಸ್ತೆ, ಹುಬ್ಬಳ್ಳಿ-30<br>2) ಶ್ರೀ ವಾಸುದೇವ ಚಂಡುರಾಯ ಪಿಂಚಕನ್<br>ಮನೆ:44, ಸಿಲ್ವರ್ ಟೌನ್, ಗೋಕುಲ ರಸ್ತೆ, ಹುಬ್ಬಳ್ಳಿ-30. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ತೀರ್ಪಿಗೆ ಪೂರ್ವ ಜಪ್ತಿ ಆದೇಶದ ಸ್ಥಿರೀಕರಣ**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಕಾಸ್ ಟೈಟಲ್‌ನಲ್ಲಿ ನಮೂದಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.1,44,728.00 ಗಳನ್ನು ದಿನಾಂಕ:1.7.2004 ರಿಂದ ಶೇ.18 ರಂತೆ ಬಡ್ಡಿಯೊಂದಿಗೆ ವಸೂಲಾತಿಗೆ ಆದೇಶ ನೀಡಲು ಕೋರಿರುತ್ತಾರೆ. ಸದರಿ ದಾವಾ ಅರ್ಜಿಯೊಂದಿಗೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಅರ್ಜಿ ಸಲ್ಲಿಸಿ 1ನೇ ಪ್ರತಿವಾದಿಯವರ ಹೆಸರಿನಲ್ಲಿರುವ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿಗೆ ಆದೇಶ ನೀಡಲಾಗಿತ್ತು.

2. 1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,45,000.00 ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005ರ ಒಳಗಾಗಿ ಅಧಿಕೃತ ಚಲನ್/ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸಲು ಪ್ರತಿವಾದಿಯವರಿಗೆ ನಿರ್ದೇಶಿಸಲಾಗಿತ್ತು. ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಸೂಚಿಸಲಾಗಿತ್ತು.

3. ದಿನಾಂಕ: 2.4.2005 ರಂದು ವ್ಯಾಜ್ಯವನ್ನು ವಿಚಾರಣೆಗೆ ತೆಗೆದುಕೊಳ್ಳಲಾಯಿತು. ವಾದಿಯವರು ಹಾಜರಿದ್ದು ಪ್ರತಿವಾದಿಗಳು ಗೈರು ಹಾಜರಾಗಿರುತ್ತಾರೆ. ಪ್ರತಿವಾದಿಗಳು ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ವೀಕರಿಸಿದ್ದು, ಸದರಿ ಆದೇಶದಲ್ಲಿ ಸೂಚಿಸಿರುವಂತೆ ಪ್ರತಿವಾದಿಯವರು ರೂ.1,45,000.00 ಮೊತ್ತವನ್ನು ವಾದಿ ಬ್ಯಾಂಕಿನ ಅಮಾನತ್ ಖಾತೆಯಲ್ಲಿ ಜಮಾ ಮಾಡಿರುವುದಿಲ್ಲವೆಂದು ವಾದಿಯವರು ವಿಚಾರಣೆಯಲ್ಲಿ ತಿಳಿಸುತ್ತಾ ಸದರಿ ಆದೇಶವನ್ನು ಸ್ಥಿರೀಕರಿಸಲು ಕೋರಿರುತ್ತಾರೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:191:ಸಿಎಲ್ಎಂ:2004 (ಭಾಗ-1) ದಿನಾಂಕ:2-2-2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಆರ್.ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳ ತೀರ್ಪಿಗೆ ಪೂರ್ವ ಜಪ್ತಿಯ ದಿನಾಂಕ 6.12.2004ರ ಆದೇಶವನ್ನು ಸ್ಥಿರೀಕರಿಸಿರುತ್ತೇನೆ.

**ಷೆಡ್ಯೂಲ್ ಆಸ್ತಿಯ ವಿವರ**

ಪ್ರಕರಣದ 1ನೇ ಪ್ರತಿವಾದಿಯಾದ ಶ್ರೀ ಸುಭಾಸ ಚಂದೂರಾಯ ಶೇಠ, ಇವರ ಹೆಸರಿನಲ್ಲಿ ಇರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಕಾಳಂಗಿ ಗ್ರಾಮದಲ್ಲಿ ಸರ್ವೆ ನಂ.41/ಎ/1 ಸ್ಥಿರಾಸ್ತಿ.

| ಕ್ರ. ಸಂ. | ಸರ್ವೆ ನಂ. | ಕ್ಷೇತ್ರ | ಆಸ್ತಿಯ ವರ್ಣನೆ | ಸ್ಥಳ | ಕಂದಾಯ | ಮಾಲೀಕನ ಹೆಸರು ಸಂಖ್ಯೆ ಮತ್ತು ಹಿಸ್ಸೆ |
|---|---|---|---|---|---|---|
| 1. | 41/ಎ/1 | 2 ಎಕರೆ 38 ಗುಂಟೆ | ಮಸಾರಿ ಜಮೀನು | ಕಾಳಂಗಿ | ಬನವಾಸಿ 762 | ಸುಭಾಸ ಚಂದೂರಾಯ ಶೇಠ |
| 2. | 48 | 2 ಎಕರೆ 8 ಗುಂಟೆ | ಗೂಚ್ಚು ಜಮೀನು | ಕಾಳಂಗಿ | ಬನವಾಸಿ | ಸುಭಾಸ ಚಂದೂರಾಯ ಶೇಠ |

ಕಾಳಂಗಿ ಗ್ರಾಮ ಸರ್ವೆ ನಂ.41/ಎ/1 ಇದರ ವಿಸ್ತೀರ್ಣ 2 ಎಕರೆ 38 ಗುಂಟೆ ಇದರ ಚಕ್ಕುಬಂದಿ:

ಪೂರ್ವಕ್ಕೆ : 42 ಮತ್ತು 41/ಬಿ ಭಾಗಗಳ ಜಮೀನು. ಸರ್ವೆ ನಂಬರ್ ಜಮೀನು
ಪಶ್ಚಿಮಕ್ಕೆ : ಸರ್ವೆ ನಂ.25
ಉತ್ತರಕ್ಕೆ : ಸರ್ವೆ ನಂ.24
ದಕ್ಷಿಣಕ್ಕೆ : ಸರ್ವೆ ನಂ.40

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 2.4.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441)

ಪಿ.ಆರ್. 651 ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ,**
**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ**
**ನಂ.132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು - 560 027**
**ಹಿಂದಿನ ವ್ಯಾಜ್ಯ ಸಂಖ್ಯೆ: 4247 / 2004-05**
**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯು.ಬಿ.ಎಫ್/ 1408 / 2004-05**

**ಅರ್ಜಿದಾರರು**
1) ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ.,
ನಂ.11, ಬುಲ್ ಟೆಂಪಲ್ ರಸ್ತೆ, ಬಸವನಗುಡಿ, ಬೆಂಗಳೂರು-04.

**ಎದುರು ಅರ್ಜಿದಾರರು**
1) ಶ್ರೀ ಬಾಲಚಂದ್ರ ಮೋಹನ ಶೇಟ್,
ಮನೆ:44, ವೈಕುಂಠ ಲೇಔಟ್, ಸಿಲ್ವರ್ ಟೌನ್,
ಗೋಕುಲ ರಸ್ತೆ, ಹುಬ್ಬಳ್ಳಿ - 30
2) ಶ್ರೀ ವಾಸುದೇವ ಚಂಡುರಾಯ ಪಿಂಚಿಕಾನ
ಮನೆ:44, ಸಿಲ್ವರ್ ಟೌನ್, ಗೋಕುಲ ರಸ್ತೆ, ಹುಬ್ಬಳ್ಳಿ-30.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ತೀರ್ಪಿಗೆ ಪೂರ್ವ ಜಪ್ತಿ ಆದೇಶದ ಸ್ಥಿರೀಕರಣ**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಕಾಸ್ ಟೈಟಿಲ್‌ನಲ್ಲಿ ನಮೂದಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.1,93,259.00 ಗಳನ್ನು ದಿನಾಂಕ:1.7.2004 ರಿಂದ ಶೇ.18 ರಂತೆ ಬಡ್ಡಿಯೊಂದಿಗೆ ವಸೂಲಾತಿಗೆ ಆದೇಶ ನೀಡಲು ಕೋರಿರುತ್ತಾರೆ. ಸದರಿ ದಾವಾ ಅರ್ಜಿಯೊಂದಿಗೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಅರ್ಜಿ ಸಲ್ಲಿಸಿ 1ನೇ ಪ್ರತಿವಾದಿಯವರ ತಂದೆಯಾದ ಶ್ರೀ ಶೇಟ್ ಮೋಹನ್ ಚಂದೂರಾಂ ಇವರ ಹೆಸರಿನಲ್ಲಿರುವ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯಲ್ಲಿ 1/3 ಭಾಗ ಹಿಸ್ಸೆಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡುವಂತೆ ಕೋರಿದ್ದು, ಈ ಕೋರಿಕೆಯನ್ನು ಅಂಗೀಕರಿಸಿ ದಿನಾಂಕ 6.12.2004ರ ಆದೇಶದ ಮೂಲಕ ಷೆಡ್ಯೂಲ್ ಆಸ್ತಿಯ 1/3 ಭಾಗ ಹಿಸ್ಸೆಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿಗೆ ಆದೇಶ ನೀಡಲಾಗಿತ್ತು.

2. 1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,95,000.00 ಗಳನ್ನು ವಾದಿ ಬ್ಯಾಂಕಿನ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 17.1.2005ರ ಒಳಗಾಗಿ ಅಧಿಕೃತ ಚಲನ್/ರಸೀದಿಯನ್ನು

ಈ ನ್ಯಾಯಾಲಯಕ್ಕೆ ಹಾಜರು ಪಡಿಸಲು ಪ್ರತಿವಾದಿಯವರಿಗೆ ನಿರ್ದೇಶಿಸಲಾಗಿತ್ತು. ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ಸೂಚಿಸಲಾಗಿತ್ತು.

3. ದಿನಾಂಕ: 2.4.2005 ರಂದು ವ್ಯಾಜ್ಯವನ್ನು ವಿಚಾರಣೆಗೆ ತೆಗೆದುಕೊಳ್ಳಲಾಯಿತು. ವಾದಿಯವರು ಹಾಜರಿದ್ದು ಪ್ರತಿವಾದಿಗಳು ಗೈರು ಹಾಜರಾಗಿರುತ್ತಾರೆ. ಪ್ರತಿವಾದಿಗಳು ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ವೀಕರಿಸಿದ್ದು, ಸದರಿ ಆದೇಶದಲ್ಲಿ ಸೂಚಿಸಿರುವಂತೆ ಪ್ರತಿವಾದಿಯವರು ರೂ.1,95,000.00 ಮೊತ್ತವನ್ನು ವಾದಿ ಬ್ಯಾಂಕಿನ ಅಮಾನತ್ ಖಾತೆಯಲ್ಲಿ ಜಮಾ ಮಾಡಿರುವುದಿಲ್ಲವೆಂದು ವಾದಿಯವರು ವಿಚಾರಣೆಯಲ್ಲಿ ತಿಳಿಸುತ್ತಾ ಸದರಿ ಆದೇಶವನ್ನು ಸ್ಥಿರೀಕರಿಸಲು ಕೋರಿರುತ್ತಾರೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:191:ಸಿಎಲ್ಎಂ:2004 (ಭಾಗ-1) ದಿನಾಂಕ:2-2-2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಆರ್.ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ಥಿಗಳ ತೀರ್ಪಿಗೆ ಪೂರ್ವ ಜಪ್ತಿಯ ದಿನಾಂಕ 6.12.2004ರ ಆದೇಶವನ್ನು ಸ್ಥಿರೀಕರಿಸಿರುತ್ತೇನೆ.

**ಷೆಡ್ಯೂಲ್ ಆಸ್ತಿಯ ವಿವರ**

ಶ್ರೀ ಶೇಟ್ ಮೋಹನ್ ಚಂದೂರಾಯ ಇವರ ಹೆಸರಿನಲ್ಲಿ ಇರುವ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮದಲ್ಲಿ ಸರ್ವೆ ನಂ.43/2 ಇವುಗಳಲ್ಲಿ 1ನೇ ಪ್ರತಿವಾದಿಯಾದ ಶ್ರೀ ಬಾಲಚಂದರ್ ಮೋಹನ್ ಶೇಟ್ ಇವರ 1/3 ಭಾಗ ಹಿಸ್ಸೆ.

ಶಿರಸಿ ತಾಲ್ಲೂಕು ಕಾಳಂಗಿ ಗ್ರಾಮ ಸರ್ವೆ ನಂ.43/2 ಇದರ ವಿಸ್ತೀರ್ಣ 11 ಎಕರೆ 14 ಗುಂಟೆ ಇದರ ಚಕ್ಕುಬಂದಿ

(ಅವಿಭಾಜಿತ ಪಾಲು)

ಪೂರ್ವಕ್ಕೆ : 53ನೇ ಸರ್ವೆ ನಂಬರ್ ಜಮೀನು

ಪಶ್ಚಿಮಕ್ಕೆ : 42ನೇ ಸರ್ವೆ ನಂಬರ್ ಜಮೀನು

ಉತ್ತರಕ್ಕೆ : 44 ಮತ್ತು 45ನೇ ಸರ್ವೆ ನಂಬರ್ ಭಾಗಗಳು

ದಕ್ಷಿಣಕ್ಕೆ : 40ನೇ ಸರ್ವೆ ನಂಬರ್ ಜಮೀನು

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 2.4.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441)

ಪಿ.ಆರ್. 652 ದಾವಾ ಪಂಚಾಯ್ತಿ ನ್ಯಾಯಾಲಯ, ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

**ಮಾನ್ಯ 8ನೇ ಎಸಿಎಂಎಂ ನ್ಯಾಯಾಲಯದ ನ್ಯಾಯಾಧೀಶರ ಸನ್ನಿಧಾನಕ್ಕೆ ಬೆಂಗಳೂರು ನಗರ**

**ನಿವೇದನೆ:**

ಈ ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ ಮಾನ್ಯ ಘನ ನ್ಯಾಯಾಲಯದಲ್ಲಿ ನಿವೇದನೆ ಮಾಡಿಕೊಳ್ಳುವುದೇನೆಂದರೆ ಈ ಕೆಳಗೆ ನಮೂದು ಮಾಡಿರುವ ವಾಹನಗಳನ್ನು ಸದ್ಯಕ್ಕೆ ವಾರಸುದಾರರು ಇಲ್ಲವೆಂದು ಅಮಾನತ್ತುಪಡಿಸಲಾಗಿದ್ದು ಸದರಿ ವಾಹನಗಳ ಪತ್ತೆಯ ಸಲುವಾಗಿ ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ವಾಹನಗಳ ವಿವರವನ್ನು ಸುತ್ತೋಲೆ ಮೂಲಕ ಕಳುಹಿಸಿಕೊಟ್ಟಿದ್ದು ಯಾವುದೇ ಪೊಲೀಸ್ ಠಾಣಾಧಿಕಾರಿಗಳು ವಾಹನಗಳು ತಮಗೆ ಬೇಕೆಂಬ ಬಗ್ಗೆ ವಿವರವನ್ನು ಕೊಟ್ಟಿರುವುದಿಲ್ಲ. ಕಾರಣ ಸದರಿ ವಾಹನಗಳ ಮಾಲೀಕರಿಗೆ ವಿಷಯ ಗೊತ್ತಾಗಲು ಸರ್ಕಾರಿ ರಾಜ್ಯಪತ್ರದಲ್ಲಿ ವಾಹನಗಳ ವಿವರವನ್ನು ನಮೂದಿಸಲು ಆದೇಶ ಮಾಡಬೇಕಾಗಿ ಈ ಮೂಲಕ ಕೋರಲಾಗಿದೆ.

| ಕ್ರ. ಸಂ. | ಸಿಮಿಸ್ ನಂ. | ಪಿಎಫ್ ನಂ. | ವಾಹನದ ವಿವರ |
|---|---|---|---|
| 1. | 3/04 | 01/04 | ಮಾರುತಿ-800 ಕೆಎ-09-ಎಂ-146 |
| 2. | 66/05 | 08/05 | ಯಜಡಿ ಮೋಟಾರ್ ಸೈಕಲ್ ನಂ.ಸಿಎಒ-7796 |
| 3. | 67/05 | 09/05 | ಕವಾಸಕಿ ಬಜಾಜ್ ನಂ.ಕೆಎ-02-ಎ-278 |
| 4. | 70/05 | 10/05 | ಲೂನಾ ನಂ.ಸಿಕೆಪಿ-6050 |
| | | | ಲೂನಾ ನಂ.ಸಿಕೆಒ-4257 |

ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಕಳುಹಿಸಿರುವ ಸುತ್ತೋಲೆಯ ಜೆರಾಕ್ಸ್ ಪ್ರತಿಯನ್ನು ಇದರೊಂದಿಗೆ ಮಾಹಿತಿಗಾಗಿ ಲಗತ್ತಿಸಲಾಗಿದೆ.

ಪಿ.ಆರ್. 653 ಪೊಲೀಸ್ ಇನ್ಸ್‌ಪೆಕ್ಟರ್ ಹೈಗ್ರೌಂಡ್ಸ್ ಪೊಲೀಸ್ ಠಾಣೆ, ಬೆಂಗಳೂರು - 560 001.

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಇವರ ನ್ಯಾಯಾಲಯದಲ್ಲಿ.**

**ಪ್ರಕರಣ ಸಂಖ್ಯೆ: ಡಬ್ಲ್ಯುಸಿಎ:ಸಿಆರ್-7/FC/05, ದಿನಾಂಕ: 8ನೇ ಏಪ್ರಿಲ್ 2005**

**ಅರ್ಜಿದಾರರು**

1. ಶ್ರೀಮತಿ ರಾಧಾ, (2) ಸಂತೋಷ, (3) ಶಶಿಕಲ, (4) ಬಾಲಕೃಷ್ಣ, "ಶಶಿ ನಿಲಯ" ಹಾಲಹಳ್ಳಿ, ಗುಡ್ಡೆ ಅಂಗಡಿ, ಕರ್ಜೆ, ಉಡುಪಿ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀಮತಿ ಗೌರಿ ಎಸ್. ಹೆಬ್ಬಾರ್‌ರವರ ಹೆಂಡತಿ, ವಾಸ: ಚೇತ್ರಿ ಬೇರ್ಕಾಡಿ ಪೋಸ್ಟ್, ಉಡುಪಿ.
2. ವಿಭಾಗ ಅಧಿಕಾರಿ, ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಕೋರ್ಟ್ ರಸ್ತೆ, ಉಡುಪಿ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ: ಶ್ರೀ ರಾಧಾ ಇವರು ತಮ್ಮ ಗಂಡನಾದ ಶ್ರೀ ಶೀನಪ್ಪ ಪೂಜಾರಿ ಇವರು ಪ್ರತಿವಾದಿಗಳಾದ ಶ್ರೀಮತಿ ಗೌರಿ ಎಸ್. ಹೆಬ್ಬಾರ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ 11.2.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ, ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**

ಪಿ.ಆರ್. 654 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ.

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

### ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯ ಕ್ರಮಾಂಕ: ಕಗೃಮಂ/ಭೂಸ್ವಾವಿ.6/05-06 ದಿನಾಂಕ: 18ನೇ ಏಪ್ರಿಲ್ 2005

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಗೃಹ ಮಂಡಳಿಯ ವಸತಿ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡುಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ ಕಾಯ್ದೆ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು, ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಕಾವೇರಿ ಭವನ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಜಿಲ್ಲೆ: ಚಾಮರಾಜನಗರ ತಾಲ್ಲೂಕು: ಗುಂಡ್ಲುಪೇಟೆ ಹೋಬಳಿ: ಕಸಬಾ ಗ್ರಾಮ: ಪಂಜನಹಳ್ಳಿ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ | ಆಕಾರ ರೂ.ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. | | |
| 1. | ವೆಂಕಟೇಗೌಡ ಬಿನ್ ಚಿಕ್ಕಹುಚ್ಚೇಗೌಡ | ಚಿಕ್ಕಹುಚ್ಚೇಗೌಡ | 216/1 | ಖುಷ್ಕಿ | 216/2 | 212/1 | 211 | 214 | 1-27<br>0-02 ಖ | 1-70 |
| 2. | ಎನ್. ವೆಂಕಟೇಶ್ ಬಿನ್ ಡಿ.ವಿ. ನಂಜುಂಡೇಗೌಡ | ಎನ್. ವೆಂಕಟೇಶ್ | 216/2 | ಖುಷ್ಕಿ | 216/3 | 216/1 | 217<br>211 | 214, | 1-21<br>0-01 ಖ | 1-55 |
| 3. | ಜಿ.ಎಸ್. ಜಮುನಾ ಕೋಂ ಬಿ.ಎಸ್. ಶಿವರಾಜು | ಜಿ.ಎಸ್. ಜಮುನಾ | 216/3 | ಖುಷ್ಕಿ | 216/4 | 216/2 | 217 | 214<br>215 | 1-22 | 1-37 |
| 4. | ಎನ್. ವೆಂಕಟೇಶ್ ಬಿನ್ ಬಿ.ವಿ. ನಂಜುಂಡೇಗೌಡ | ಎನ್. ವೆಂಕಟೇಶ್ | 216/4 | ಖುಷ್ಕಿ | ರಸ್ತೆ | 216/3 | 217 | 215 | 2-22 | 2-58 |
| 5. | ವೆಂಕಟರಂಗಶೆಟ್ಟಿ ಬಿನ್ ಕಾಳಶೆಟ್ಟಿ | ವೆಂಕಟರಂಗಶೆಟ್ಟಿ | 212/1 | ಖುಷ್ಕಿ | 216/1 | 212/2 | 211 | 213 | 1-18 | 1-51 |
| | | | | **ಒಟ್ಟು** | | | | | **8-30<br>0-03 ಖ** | |

ಪಿ.ಡಿ. 26 ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## ವಿಶೇಷ ಭೂಸ್ವಾಧೀನಾಧಿಕಾರಿಗಳವರ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

### ಅಧಿಸೂಚನೆ ಕ್ರಮಾಂಕ: ಭೂಸ್ವಾವಿ/30/2002-03 ದಿನಾಂಕ: 12ನೇ ಏಪ್ರಿಲ್ 2005

ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕರ್ನಾಟಕ ರಾಜ್ಯ ಸರ್ಕಾರದ ಅಧಿನಿಯಮ 33/1991ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕಲಂ 16ರ ಪ್ರಕರಣ (2) ಉಪ ಪ್ರಕರಣ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕರ್ನಾಟಕ ಗೃಹ ಮಂಡಳಿಯು ವಸತಿ ಯೋಜನೆಗಾಗಿ ಅಧಿಕೃತವಾಗಿ ಭೂಸ್ವಾಧೀನ ಅಧಿನಿಯಮದ ಪ್ರಕರಣ 16(1) ರಂತೆ ವಶಪಡಿಸಿಕೊಂಡಿರುತ್ತದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

ಅನುಸೂಚಿ

ಜಿಲ್ಲೆ: ದಾವಣಗೆರೆ ತಾಲ್ಲೂಕು: ಹರಿಹರ ಹೋಬಳಿ ಕಸಬಾ ಗ್ರಾಮ: ಹನಗವಾಡಿ

| ಕ್ರ. ಸಂ. | ಸರ್ವೆ ನಂ. | ತರಹೆ | ವಿಸ್ತೀರ್ಣ ಎ. ಗುಂ. | ವಶಪಡಿಸಿಕೊಂಡ ದಿನಾಂಕ |
|---|---|---|---|---|
| 1 | 36/1 | ಖುಷ್ಕಿ | 9-17 | 15.3.2005 |
| | ಒಟ್ಟು | | 9-17 | |

ಪಿ.ಡಿ. 27 ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

**KARNATAKA ELECTRICITY REGULATORY COMMISSION BANGALORE**
**Notification No.Y/01/4 dated 25th March 2005**
**Amendment to KERC (Recovery of Expenditure for Supply of Electricity) Regulations, 2004.**

**Preamble:**

Whereas, Section 46 of the Electricity Act, 2003 empowers the State Commission to authorize by way of regulations, a Distribution Licensee to charge from a person requiring a supply of electricity in pursuance of Section 43, any expenses reasonably incurred in providing any electrical line or plant used for the purpose of giving that supply, the Commission by virtue of the said powers, read with Section 181 of the Act has notified " KERC (Recovery of Expenditure for Supply of Electricity) Regulations, 2004" in the Notification no.Y/01/4 dated 12-11-2004 and the same was published in Part-3 of Gazette of Karnataka dated 16-12-2004 (Page nos.2216 to 2222).

With the said issuance of KERC (Recovery of Expenditure for Supply of Electricity) Regulations, 2004, certain provisions made under K.E.R.C.(Electricity Supply and Distribution)Code, 2000-01 noted below have become redundant:

a)9.00(a),9.00(b),9.00(c)
b)9.02
c)9.04
d)9.05
e)9.07
f)9.08 except the NOTE under section 9.08(b)(4).
g)9.11(2)
h)10.02
i)10.04
j)10.05
k)10.07
l)10.08
m)10.12

**AMENDMENT**

In exercise of the powers conferred by section 181 read with section 46 and sub-section (2) of section 43 of the Electricity Act 2003 (Central Act 36 of 2003) and all powers enabling it in that behalf, the Karnataka Electricity Regulatory Commission hereby makes the following Regulations further to amend KERC (Recovery of Expenditure for Supply of Electricity) Regulations, 2004.

I. **Title and commencement:**
   a) These Regulations may be called the KERC (Recovery of Expenditure for Supply of Electricity) (Amendment) Regulations, 2005**.**
   b) These Regulations shall come into force from the date of publication in the official Gazette of Karnataka and will be in force unless amended otherwise.
   c) These Regulations shall extend to the whole of the state of Karnataka.

II. Amendments to the following Regulations of KERC (Recovery of Expenditure for Supply of Electricity) Regulations, 2004. The existing Sections as in column 3 of the Table below shall stand substituted by the provisions as in column 4:

| Sl.No. | Section No. | AS Existing | As Amended |
|---|---|---|---|
| 1 | 4.1.4 | Nil | **REPEAL:**<br>1.The provisions of the KERC(Electricity Supply and Distribution) Code,2000-01 that are in any manner repugnant to or inconsistent with these Regulations shall stand repealed to the extent of such repugnance or inconsistency with effect from the date of notification of this amendment in the Gazette of Karnataka.<br>2.Without prejudice to the generality of sub-clause 1,the following provisions of the KERC(Electricity Supply and Distribution) Code,2000-01shall stand repealed :<br>a)9.00(a),9.00(b),9.00(c)<br>b)9.02 |

| Sl.No. | Section No. | AS Existing | As Amended |
|---|---|---|---|
| | | | c)9.04<br>d)9.05<br>e)9.07<br>f)9.08 except the NOTE under section 9.08(b)(4).<br>g)9.11(2)<br>h)10.02<br>i)10.04<br>j)10.05<br>k)10.07<br>l)10.08<br>m)10.12 |

By Order of the Commission,
PD. 28 Secretary,
Karnataka Electricity Regulatory Commission.

**KARNATAKA ELECTRICITY REGULATORY COMMISSION, BANGALORE.**
**Notification No.D/ISD/07/4 dated: 25th March 2005**
**K.E.R.C (Interest on Security Deposit) Regulations, 2005.**

**Preamble:**

In exercise of the powers conferred by section 181 read with section 47 (4) of the Electricity Act 2003 (Central Act 36 of 2003) and all powers enabling it in that behalf, the Karnataka Electricity Regulatory Commission hereby makes the following Regulations, namely: -

**1. Short title, commencement and interpretation**

a) These Regulations shall be termed as K.E.R.C. (Interest on Security Deposit) Regulations, 2005.
b) They shall come into force with effect from the notification in the official gazette of the State of Karnataka.
c) They shall extend to the whole State of Karnataka.

**2 Definitions**

In these Regulations, unless the context otherwise requires: -

a) **"Act"** means the Electricity Act, 2003 (36 of 2003);
b) **"ASD"** means Additional Security Deposit to make up the minimum deposit as per the relevant regulation;
c) **"Bank Rate"** means the Bank Rate as notified by Reserve Bank of India;
d) **"Commission"** means the Karnataka Electricity Regulatory Commission;
e) "**Consumer"** means any person who is supplied with electricity for his own use by a licensee or the Government or by any other person engaged in the business of supplying electricity to the public under this Act or any other law for the time being in force and includes any person whose premises are for the time being connected for the purpose of receiving electricity with the works of a licensee, the Government or such other person, as the case may be;
f) **"Installation"** means the whole of the electric wires, fittings, motors and apparatus installed and wired by or on behalf of a Consumer on one and the same premises starting from the point of commencement of supply.
g) **"KER. Act"** means the Karnataka Electricity Reform Act, 1999 (Karnataka Act No. 25 of 1999.)
h) **"Licensee"** means a person who is a distribution licensee under section 14 of the Electricity Act 2003.
i) **"R.R. No." or "REVENUE REGISTER NUMBER."** means the number assigned to the Consumer's installation.
j) "**Security Deposit"** means MMD (Months Minimum Deposit) / MSD (Meter Security Deposit). MMD includes 2 Months Minimum Deposit / 3 Months Minimum Deposit / Year's Minimum Deposit.

